# ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 1309 |
| 2 | ಸದಸ್ಯರ ಹೆಸರು | : | ಶ್ರೀ ಅಡಗೂರ್ ಹೆಚ್. ವಿಶ್ವನಾಥ್ (ನಾಮನಿರ್ದೇಶನ ಹೊಂದಿದವರು) |
| 3 | ಉತ್ತರಿಸುವ ದಿನಾಂಕ | : | 23.09.2021 |
| 4 | ಉತ್ತರಿಸುವ ಸಚಿವರು | : | ಗೃಹ ಸಚಿವರು |

| ಪ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕಮಾಂಡೆಂಟ್ ಒಂದನೇ ಪಡೆ ಕೆ.ಎಸ್.ಆರ್.ಪಿ. ಬೆಂಗಳೂರು ರವರ ಘಟಕದಲ್ಲಿ ನಡೆಸುತ್ತಿರುವ ಕ್ಯಾಂಟೀನ್ (ಊಟ ಮತ್ತು ಉಪಹಾರ) ನಲ್ಲಿ ದಿನಾಂಕ 01.01.2010 ರಿಂದ 20.08.2015ರ ಅವಧಿಯಲ್ಲಿ ನಡೆದ ವ್ಯವಹಾರದಲ್ಲಿ ರೂ.27,55,650/-ಗಳ ಹಣ ದುರುಪಯೋಗ ಆಗಿರುವುದು ಆಂತರಿಕ ಲೆಕ್ಕಪರಿಶೋಧನೆಯಲ್ಲಿ ಬೆಳಕಿಗೆ ಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕಮಾಂಡೆಂಟ್ ಒಂದನೇ ಪಡೆ ಕೆ.ಎಸ್.ಆರ್.ಪಿ. ಬೆಂಗಳೂರು ಘಟಕದ ಮೆಸ್ ಮತ್ತು ಕ್ಯಾಂಟೀನ್ ವ್ಯವಹಾರದ ಬಗ್ಗೆ ದಿನಾಂಕ: 01.01.2010 ರಿಂದ 20.08.2015 ರವರೆಗೆ (ಐದು ವರ್ಷಗಳ) ಅವಧಿಗೆ ಜಂಟಿ ನಿಯಂತ್ರಕರು, ಹಣಕಾಸು ಇವರು ವಿಶೇಷ ಆಂತರಿಕ ಲೆಕ್ಕಪರಿಶೋಧನೆ ನಡೆಸಿ ವರದಿಯನ್ನು ಸಲ್ಲಿಸಿರುತ್ತಾರೆ. ಈ ಹಣಕಾಸು ದುರುಪಯೋಗದ ಕುರಿತು ಕಮಾಂಡೆಂಟ್, 9ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರು ವಿಚಾರಣೆ ಕೈಗೊಂಡು ದಿನಾಂಕ 18.09.2021ರಂದು ವರದಿಯನ್ನು ಸಲ್ಲಿಸಿದ್ದು, ಸದರಿ ವರದಿಯಲ್ಲಿ ಶ್ರೀ ಜೆ. ರೂಪೇಶ್, ಡೆಪ್ಯೂಟಿ ಕಮಾಂಡೆಂಟ್ ಶ್ರೀ ಆರ್. ನಾಗೇಶ್, ಸ್ಪೆಆರ್‌ಹೆಚ್‌ಸಿ-160, ಶ್ರೀ ರಫೀಕ್ ಉಲ್ಲಾಖಾನ್, ಸ್ಪೆಆರ್‌ಹೆಚ್‌ಸಿ-81 ಇವರುಗಳ ಪ್ರಭಾರದ ಅವಧಿಯಲ್ಲಿ ಮೆಸ್ ಮತ್ತು ಕ್ಯಾಂಟೀನ್ ವ್ಯವಹಾರದಲ್ಲಿ ಅಂದಾಜು ರೂ.10,32,765/-ಗಳ ಹಣ ದುರುಪಯೋಗವಾಗಿರುವುದು ಹಾಗೂ ಶ್ರೀ ಜೆ. ರೂಪೇಶ್, ಡೆಪ್ಯೂಟಿ ಕಮಾಂಡೆಂಟ್ ಇವರ ಅವಧಿಯಲ್ಲಿ ಫೀಡಿಂಗ್ ಚಾರ್ಜ್ ಹಣ ರೂ.7,16,100/-ಗಳನ್ನು ಚೆಕ್ ಮುಖಾಂತರ ಪಡೆದು ಮೆಸ್ ನಿರ್ವಹಣೆ ನಂತರ ಬಂದ ಲಾಭಾಂಶವನ್ನು ಹಿಂದಿರುಗಿಸದೇ ದುರುಪಯೋಗಪಡಿಸಿಕೊಂಡಿರುವುದು ಗಮನಕ್ಕೆ ಬಂದಿರುತ್ತದೆ. |
| ಆ | ಬಂದಿದ್ದಲ್ಲಿ, ಸದರಿ ವರದಿ ಅನ್ವಯ ಸಂಬಂಧಪಟ್ಟ ಆರೋಪಿತ ಅಧಿಕಾರಿಗಳ ವಿರುದ್ಧ ಕೈಗೊಂಡ ಶಿಸ್ತಿನ ಕ್ರಮವೇನು; ಹಾಗೂ ದುರುಪಯೋಗಗೊಂಡ 27,55,650/- ರೂ ಗಳನ್ನು ಸಂಬಂಧಪಟ್ಟ ಅಧಿಕಾರಿಗಳಿಂದ ವಸೂಲಿ ಮಾಡಿ ಸರ್ಕಾರಕ್ಕೆ ಜಮಾ ಮಾಡಲಾಗಿದೆಯೇ; | ಆರೋಪಿತರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಡಿಜಿ&ಐಜಿಪಿ ರವರು ದಿನಾಂಕ: 20.09.2021 ರಲ್ಲಿ ಪ್ರಸ್ತಾವನೆ ಸಲ್ಲಿಸಿದ್ದು ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಹಾಗೂ ದುರುಪಯೋಗವಾದ ಹಣವನ್ನು ವಸೂಲಿ ಮಾಡಲು ಪರಿಶೀಲಿಸಿ ಕ್ರಮವಹಿಸಲಾಗುವುದು. |
| ಇ | ರೂ.27,55,650/- ದುರುಪಯೋಗ ಪಡಿಸಿಕೊಂಡು ಆರ್ಥಿಕ ಅಪರಾಧವೆಸಗಿದ ಅಧಿಕಾರಗಳ ವಿರುದ್ಧ ಅಪರಾಧ ಮೊಕದ್ದಮೆಯನ್ನು ಇದುವರೆಗೂ ಹೂಡದಿರಲು ಕಾರಣವೇನು? (ಕ್ರಮ ಕೈಗೊಂಡಿದ್ದಲ್ಲಿ ದಾಖಲೆಗಳ ಸಹಿತ ವರದಿ ನೀಡುವುದು) | ಹಣ ದುರುಪಯೋಗದ ಆರೋಪದ ಕುರಿತು ಆರೋಪಿತರುಗಳ ವಿರುದ್ಧ ಕ್ರಿಮಿನಲ್ ಪ್ರಕರಣ ದಾಖಲಿಸಲು ಕ್ರಮ ವಹಿಸಲಾಗುವುದು. |

ಸಂಖ್ಯೆ: ಒಇ 234 ಪಿಇಜಿ 2021

(ಆರಗ ಜ್ಞಾನೇಂದ್ರ)
ಗೃಹ ಸಚಿವರು